ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ರಾಜ್ಯ ಹೆದ್ದಾರಿಗಳನ್ನು ರಾಷ್ಟ್ರೀಯ ಹೆದ್ದಾರಿಗಳನ್ನಾಗಿ ಪರಿವರ್ತಿಸುವ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

353 (561) ಮಾನ್ಯ ಲೋಕೋಪಯೋಗಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಇತ್ತೀಚೆಗೆ ರಾಜ್ಯದ ಯಾವ ಯಾವ ರಾಜ್ಯ ಹೆದ್ದಾರಿಗಳನ್ನು ರಾಷ್ಟ್ರೀಯ ಹೆದ್ದಾರಿಗಳನ್ನಾಗಿ ಪರಿವರ್ತಿಸಲು ಅಥವಾ ಮೇಲ್ದರ್ಜೆಗೇರಿಸಲು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿದೆ;(ಸಂಪೂರ್ಣ ಮಾಹಿತಿ ನೀಡುವುದು)

(ಆ) ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ರಾಷ್ಟ್ರೀಯ ಹೆದ್ದಾರಿಗಳು ಎಷ್ಟು ಕಿ.ಮೀ. ಒಳಗೊಂಡಿರುತ್ತದೆ ; ಇದಕ್ಕೆ ಅಂದಾಜಿಸಿರುವ ಅನುದಾನವೆಷ್ಟು ; (ವಿವರ ನೀಡುವುದು)

(ಇ) ಕಳೆದ 3 ವರ್ಷಗಳಿಂದೀಚೆಗೆ ಕೇಂದ್ರ ಸರ್ಕಾರವು ರಾಜ್ಯದ ಎಷ್ಟು ರಾಷ್ಟ್ರೀಯ ಹೆದ್ದಾರಿಗಳನ್ನು ಮಂಜೂರು ಮಾಡಿದೆ ; ಆ ರಾಷ್ಟ್ರೀಯ ಹೆದ್ದಾರಿಗಳು ಯಾವುವು ; ಇದಕ್ಕೆ ಎಷ್ಟು ಅನುದಾನವನ್ನು ಒದಗಿಸಿ ಆಡಳಿತಾತ್ಮಕ ಅನುಮೋದನೆ ನೀಡಿದೆ? (ಸಂಪೂರ್ಣ ಮಾಹಿತಿಯನ್ನು ಆದೇಶದ ಪ್ರತಿಯೊಂದಿಗೆ ನೀಡುವುದು)